# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 1436 |
| ಸದಸ್ಯರ ಹೆಸರು | ಶ್ರೀ ಶರಣಪ್ಪ ಮಟ್ಟೂರ (ಶಿಕ್ಷಕರ ಕ್ಷೇತ್ರ) |
| ಉತ್ತರಿಸುವ ದಿನಾಂಕ | 19-03-2020 |
| ಉತ್ತರಿಸುವ ಸಚಿವರು | ಮಾನ್ಯ ಮುಖ್ಯಮಂತ್ರಿಗಳು |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| (ಅ). | ವಾಣಿಜ್ಯ ತೆರಿಗೆ ಇಲಾಖೆಗೆ ಸಂಬಂಧಿಸಿದಂತೆ ಬೆಳಗಾವಿ ವಿಭಾಗದಲ್ಲಿ ಸೇವೆ ಸಲ್ಲಿಸುತ್ತಿರುವ ಯಾವ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವಿರುದ್ಧ ಇಲಾಖಾ ವಿಚಾರಣೆ ಮತ್ತು ನ್ಯಾಯಾಲಯ ವಿಚಾರಣೆ ಪ್ರಕರಣಗಳು ಮುಕ್ತಾಯಗೊಂಡಿವೆ;(ವಿವರ ನೀಡುವುದು). | ಶ್ರೀ ರುದ್ರನಗೌಡ ಬಸವನಗೌಡ ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ಸ್ಥಳೀಯ ಸರಕು ಮತ್ತು ಸೇವಾ ತೆರಿಗೆ ಕಛೇರಿ-420, ಬಾಗಲಕೋಟೆ ಇವರ ವಿರುದ್ಧ ಇಲಾಖಾ ವಿಚಾರಣೆ ಮತ್ತು ನ್ಯಾಯಾಲಯದ ವಿಚಾರಣೆಗಳು ಮುಕ್ತಾಯಗೊಂಡಿರುತ್ತವೆ.<br>ಸದರಿ ಅಧಿಕಾರಿಯವರ ವಿರುದ್ಧ ಕೊಲೆ ಅಪರಾಧಕ್ಕೆ ಸಂಬಂಧಿಸಿದ ಪ್ರಕರಣದ ವಿಚಾರಣೆ ನಡೆಸಿದ ಹುಕ್ಕೇರಿಯ ತ್ವರಿತಗತಿ ನ್ಯಾಯಾಲಯವು ಸದರಿಯವರನ್ನು ತಪ್ಪಿತಸ್ಥರೆಂದು ಪರಿಗಣಿಸಿ ದಿನಾಂಕ:03-08-2010 ರಂದು ಜೀವಾವಧಿ ಶಿಕ್ಷೆ ವಿಧಿಸಿರುತ್ತದೆ. ಅಧಿಕಾರಿಯು ನ್ಯಾಯಾಂಗದ ಬಂಧನದಲ್ಲಿದ್ದ ಅವಧಿ ದಿನಾಂಕ: 24-12-2008 ರಿಂದ 21-03-2009 ಹಾಗೂ 03-08-2010 ರಿಂದ 31-01-2011 ರವರೆಗಿನ ಅವಧಿಯನ್ನು Deemed suspension ಎಂದು ಪರಿಗಣಿಸಲಾಗಿರುತ್ತದೆ. ಕೆಳ ನ್ಯಾಯಾಲಯದ ತೀರ್ಪಿನ ವಿರುದ್ಧ ಕ್ರಿಮಿನಲ್ ಮೇಲ್ಮನವಿಯನ್ನು ಪುರಸ್ಕರಿಸಿದ ಗೌರವಾನ್ವಿತ ಉಚ್ಚ ನ್ಯಾಯಾಲಯವು ಕೆಳ ನ್ಯಾಯಾಲಯದ ತೀರ್ಪನ್ನು ರದ್ದುಗೊಳಿಸಿ, ಅಧಿಕಾರಿಯವರನ್ನು ಆರೋಪದಿಂದ ಖುಲಾಸೆಗೊಳಿಸಿ ದಿನಾಂಕ:24-01-2011 ರಂದು ಅಂತಿಮ ತೀರ್ಪು ನೀಡಿದ್ದರಿಂದ ಅಧಿಕಾರಿಯು ದಿನಾಂಕ:31-01-2011ರಂದು ನ್ಯಾಯಾಂಗ ಬಂಧನದಿಂದ ಬಿಡುಗಡೆ ಹೊಂದಿರುತ್ತಾರೆ. ಸದರಿ ತೀರ್ಪಿನ ವಿರುದ್ಧ ಸರ್ಕಾರವು ಮೇಲ್ಮನವಿ ಸಲ್ಲಿಸದಿರಲು ತೀರ್ಮಾನಿಸಿದೆ.<br>ಮೇಲೆ ವಿವರಿಸಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಅಧಿಕಾರಿಯವರು ಸರ್ಕಾರಿ ಅಧಿಕಾರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ದುರ್ನಡತೆ ಎಸಗಿರುವ ಆರೋಪದ ಕುರಿತು ವಿಚಾರಣೆ ನಡೆಸಲು ಸರ್ಕಾರವು ದಿನಾಂಕ:05-12-2015ರ ಆದೇಶದಲ್ಲಿ ಶ್ರೀ ಎನ್. ಗುಡ್ಡಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿತ್ತು. ವಿಚಾರಣಾಧಿಕಾರಿಯವರು ದಿನಾಂಕ: 15-04-2016ರ ವಿಚಾರಣಾ ವರದಿಯಲ್ಲಿ ಅಧಿಕಾರಿಗಳ ವಿರುದ್ಧದ ಆರೋಪ ರುಜುವಾತಾಗಿರುವುದಿಲ್ಲವೆಂದು ವರದಿ ನೀಡಿರುತ್ತಾರೆ. ಈ ವರದಿಯನ್ನು ಸರ್ಕಾರವು ಒಪ್ಪದೇ ದಿನಾಂಕ:19-07-2017ರಂದು 2ನೇ ಕಾರಣ ಕೇಳುವ ನೋಟೀಸನ್ನು ನೀಡಿದ್ದು, ಅಧಿಕಾರಿಯು ಸಲ್ಲಿಸಿದ ಸಮಜಾಯಿಷಿಯಲ್ಲಿನ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ಸರ್ಕಾರವು ದಿನಾಂಕ:03-06-2019ರ ಆದೇಶದಲ್ಲಿ ಸದರಿ ಅಧಿಕಾರಿಯವರನ್ನು ದಿನಾಂಕ:07-04-2015ರ ನೋಟೀಸಿನಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸಿರುತ್ತದೆ ಹಾಗೂ ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ. |
| (ಆ) | ಯಾವ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವಿರುದ್ಧ ಸರ್ಕಾರವು ಇಲಾಖಾ ವಿಚಾರಣೆ ನಡೆಸಿ ಶಿಸ್ತುಕ್ರಮವನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ; ಮತ್ತು ಅವರ ಸೇವೆಯನ್ನು ಖಾಯಂಗೊಳಿಸಿ ಆದೇಶ ಹೊರಡಿಸಿದೆ(ವಿವರ ನೀಡುವುದು) | ಶ್ರೀ ರುದ್ರನಗೌಡ ಬಸವನಗೌಡ ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರುಇವರ ವಿರುದ್ಧದ ಶಿಸ್ತು ಕ್ರಮವನ್ನು ಸರ್ಕಾರವು ದಿನಾಂಕ03-06-2019ರ ಆದೇಶದಲ್ಲಿ ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿರುತ್ತದೆ ಹಾಗೂ ಈ ಘಟನೆ ನಡೆಯದಿದ್ದಲ್ಲಿ ಅಧಿಕಾರಿಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಿದೆ. |

-2--

| | | |
|---|---|---|
| (ಇ) | ಈ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಅವರು ಪಡೆಯಬೇಕಾಗಿದ್ದ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಸರ್ಕಾರವು ಆದೇಶಿಸಿದೆಯೇ; ಆದೇಶಿಸಿದ್ದರೇ ಅದರ ಪ್ರತಿ ನೀಡುವುದು; | ದಿನಾಂಕ 03-06-2019ರ ಆದೇಶದಲ್ಲಿ ಸರ್ಕಾರವು ಶ್ರೀ ರುದ್ರನಗೌಡ ಬಸವನಗೌಡ ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರು ಈ ಘಟನೆ ನಡೆಯದಿದ್ದಲ್ಲಿ ಅಧಿಕಾರಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ ಎಂದು ಆದೇಶಿಸಿದೆ. ಆದೇಶದ ಪ್ರತಿಯನ್ನು ಮಾಹಿತಿಗಾಗಿ ಸಲ್ಲಿಸಲಾಗಿದೆ. |
| (ಈ) | ಸರ್ಕಾರದ ಆದೇಶದಲ್ಲಿ ಅಧಿಕಾರಿಯು ಯಾವ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ತಿಳಿಸಿರುವುದರಿಂದ, ಆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಸೇವೆಯನ್ನು ಸೇವಾ ಹಿರಿತನದ ಆಧಾರದ ಮೇಲೆ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ವೃಂದದಲ್ಲಿ ಮತ್ತು ವಾಣಿಜ್ಯ ತೆರಿಗೆ ಉಪ ಆಯುಕ್ತರ ವೃಂದದಲ್ಲಿ ಯಾವ ದಿನಾಂಕದಿಂದ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗಿದೆ; ಇಲ್ಲವಾದಲ್ಲಿ ಕಾರಣಗಳೇನು ತಿಳಿಸುವುದು; | ಶ್ರೀ ರುದ್ರನಗೌಡ ಬಸವನಗೌಡ ಪಾಟೀಲ್, ನಿಯಮ-32ರಡಿಯ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರನ್ನೊಳಗೊಂಡಂತೆ ಇತರೇ ಅರ್ಹ ಕಾರ್ಯನಿರತ ಅಧಿಕಾರಿಗಳಿಗೆ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ಹುದ್ದೆಯಲ್ಲಿ ಪೂರ್ವಾನ್ವಯ ಸ್ಥಾನಾಪನ್ನ ಮುಂಬಡ್ತಿಯನ್ನು ನೀಡಲು ಕರ್ನಾಟಕ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. ಕರ್ನಾಟಕ ಲೋಕಸೇವಾ ಆಯೋಗವು ನೀಡುವ ಸಹಮತಿಯನ್ನು ಆಧರಿಸಿ ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರ ಹುದ್ದೆಗೆ ಸ್ಥಾನಪನ್ನ ಮುಂಬಡ್ತಿ ನೀಡಿದ ನಂತರ, ಅವರ ಸೇವಾ ಜ್ಯೇಷ್ಠತೆಯನ್ನು ಆಧರಿಸಿ, ಮುಂಬಡ್ತಿ ಹುದ್ದೆಗಳ ಅರ್ಹತಾ ದಿನಾಂಕವನ್ನು ನಿಗದಿಪಡಿಸಲಾಗುವುದು. |
| (ಉ) | ಒಬ್ಬ ಸರ್ಕಾರಿ ನೌಕರ/ಅಧಿಕಾರಿಯು ಕ್ರಿಮಿನಲ್ ಪ್ರಕರಣದಲ್ಲಿ ಮತ್ತು ಇಲಾಖಾ ವಿಚಾರಣೆಯಲ್ಲಿ ದೋಷಮುಕ್ತಗೊಂಡ ಬಳಿಕ ಆ ಅಧಿಕಾರಿಯು ವಿರುದ್ಧ ಶಿಸ್ತುಕ್ರಮವನ್ನು ಕೈಬಿಟ್ಟು ಅಧಿಕಾರಿಯ ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಸರ್ಕಾರವು ತಿಳಿಸಿರುವುದರಿಂದ ಅಂತಹ ಅಧಿಕಾರಿಯು ಸಂವಿಧಾನ ಬದ್ಧ ಹುದ್ದೆ ಪಡೆಯಲು ಕಾನೂನು ಅಡಚಣೆ ಇದೆಯೇ; | ಇಲ್ಲ. |
| (ಊ) | ದೂರುದಾರರು ತಮ್ಮ ಹೆಸರು, ವಿಳಾಸ, ತಿಳಿಸದೇ ಒಬ್ಬ ಸರ್ಕಾರಿ ನೌಕರನ ವಿರುದ್ಧ ದೂರು ಸಲ್ಲಿಕೆ ಮಾಡಿದಲ್ಲಿ, ಅಂತಹ ಸರ್ಕಾರಿ ನೌಕರನಿಂದ ಸಂಬಂಧಿಸಿದ ಇಲಾಖಾ ಮುಖ್ಯಸ್ಥರು ಸಮಜಾಯಿಷಿಯನ್ನು ಪಡೆಯಬಹುದೆ; ಈ ಸಂಬಂಧ ಸರ್ಕಾರಿ ಆದೇಶ/ಸುತ್ತೋಲೆ ಇದ್ದಲ್ಲಿ ಒದಗಿಸುವುದು? | ಸರ್ಕಾರದ ಸುತ್ತೋಲೆ ಸಂಖ್ಯೆ: ಸಿಆಸುಇ 21 ಸೇಇವಿ 2019, ದಿನಾಂಕ:3-10-2019 ರಲ್ಲಿ ಸರ್ಕಾರಿ ಅಧಿಕಾರಿ/ನೌಕರರ ವಿರುದ್ಧದ ಅನಾಮಧೇಯ ದೂರುಗಳನ್ನು ಕಡತಗೊಳಿಸಲು ಸೂಚನೆ ನೀಡಲಾಗಿದೆ. (ಪ್ರತಿ ಲಗತ್ತಿಸಿದೆ) |

**ಆಇ 02 ವಾತೆತ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

**ಕರ್ನಾಟಕ ಸರ್ಕಾರದ ನಡವಳಿಗಳು**

ವಿಷಯ: ಶ್ರೀ ಆರ್.ಬಿ. ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ವಿರುದ್ಧದ ಶಿಸ್ತು ಕ್ರಮ – ಆರೋಪ ಮುಕ್ತರನ್ನಾಗಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.



ಓದಲಾಗಿದೆ: 1) ಸರ್ಕಾರದ ಆದೇಶ ಸಂಖ್ಯೆ: ಆಇ 51 ವಾತೆಶ 2010, ದಿನಾಂಕ: 05.12.2015.

2) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ದಿನಾಂಕ: 15.04.2016.

ಪ್ರಸ್ತಾವನೆ:



ಶ್ರೀ ರುದ್ರನಗೌಡ ಬಸನಗೌಡ ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ವಿರುದ್ಧ ಕೊಲೆ ಅಪರಾದಕ್ಕೆ ಸಂಬಂಧಿಸಿದಂತೆ, ಪ್ರಕರಣದ ವಿಚಾರಣೆ ನಡೆಸಿದ ಹುಕ್ಕೇರಿಯ ತ್ವರಿತಗತಿ ನ್ಯಾಯಾಲಯವು, ಸದರಿಯವರನ್ನು ತಪ್ಪಿತಸ್ಥರೆಂದು ಪರಿಗಣಿಸಿ ದಿನಾಂಕ: 03–08–2010 ರಂದು ಜೀವಾವಧಿ ಶಿಕ್ಷೆ ವಿಧಿಸಿತು. ಅಧಿಕಾರಿಯು ನ್ಯಾಯಾಂಗ ಬಂಧನದಲ್ಲಿದ್ದ ದಿನಾಂಕ: 24.12.2008 ರಿಂದ 21.03.2009 ಹಾಗೂ ದಿನಾಂಕ: 03--08--2010 ರಿಂದ 31-01–2011 ರವರೆಗಿನ ಅವಧಿಯನ್ನು Deemed suspension ಎಂದು ಪರಿಗಣಿಸಲಾಗಿದೆ. ಕೆಳ ನ್ಯಾಯಾಲಯದ ತೀರ್ಪಿನ ವಿರುದ್ಧ ಕ್ರಿಮಿನಲ್ ಮೇಲ್ಮನವಿಯನ್ನು ಪುರಸ್ಕರಿಸಿದ ಗೌರವಾನ್ವಿತ ಉಚ್ಚ ನ್ಯಾಯಾಲಯವು ಕೆಳ ನ್ಯಾಯಾಲಯದ ತೀರ್ಪನ್ನು ರದ್ದುಗೊಳಿಸಿ, ಅಧಿಕಾರಿಯವರನ್ನು ಆರೋಪದಿಂದ ಖುಲಾಸೆಗೊಳಿಸಿ ದಿನಾಂಕ 24-01–2011 ರಂದು ಅಂತಿಮ ತೀರ್ಮ ನೀಡಿದ್ದರಿಂದ ಅಧಿಕಾರಿಯು ದಿನಾಂಕ 31-01–2011 ರಂದು ನ್ಯಾಯಾಂಗ ಬಂಧನದಿಂದ ಬಿಡುಗಡೆ ಹೊಂದಿರುತ್ತಾರೆ. ಕ್ರಿಮಿನಲ್ ಪ್ರಕರಣದಲ್ಲಿ ಗೌರವಾನ್ವಿತ ಉಚ್ಚ ನ್ಯಾಯಾಲಯದ ತೀರ್ಪಿನ ವಿರುದ್ಧ ಸರ್ಕಾರವು ಮೇಲ್ಮನವಿ ಸಲ್ಲಿಕೆ ಮಾಡುವುದಿಲ್ಲವೆಂದು ಒಳಾಡಳಿತ ಇಲಾಖೆಯು ತೀರ್ಮಾನಿಸಿದೆ.

ಶ್ರೀ ಆರ್.ಬಿ. ಪಾಟೀಲ, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಇವರು ಈ ಹಿಂದೆ ಧಾರವಾಡದ ಮೌಲ್ಯವರ್ಧಿತ ತೆರಿಗೆ ವಿಭಾಗದ (ಲೆಕ್ಕಪರಿಶೋಧನೆ), ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಕೊಲೆಯಂತಹ ಗುರುತರವಾದ ಆಪಾದನೆ ಮೇಲೆ ನ್ಯಾಯಾಂಗ ಬಂಧನಕ್ಕೆ ಒಳಗಾದ ಆರೋಪಕ್ಕಾಗಿ ಘಟನೆ ಸಂಭವಿಸಿದ 7 ವರ್ಷಗಳ ಬಳಿಕ ಸರ್ಕಾರಿ ಅಧಿಕಾರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿ ದುರ್ನಡತೆ ಎಸಗಿರುವ ಆರೋಪದ ಕುರಿತು ವಿಚಾರಣೆಯನ್ನು ನಡೆಸಲು ಮೇಲೆ (1) ರಲ್ಲಿ ಓದಲಾದ ದಿನಾಂಕ: 05--12–2015ರ ಸರ್ಕಾರಿ ಆದೇಶದಲ್ಲಿ ಶ್ರೀ ಎನ್. ಗುಡ್ಡಕಾರ್, ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣಾಧಿಕಾರಿಯವರು ವಿಚಾರಣೆ ನಡೆಸಿ, ಆರೋಪ ರುಜುವಾತಾಗಿರುವುದಿಲ್ಲವೆಂದು ದಿನಾಂಕ: 15–04–2016 ರ ವರದಿ ನೀಡಿರುತ್ತಾರೆ. ಈ ವರದಿಯನ್ನು ಒಪ್ಪದೇ ದಿನಾಂಕ: 19-07–2017 ರಂದು ಅಧಿಕಾರಿಗೆ 2ನೇ ಕಾರಣ ಕೇಳುವ ನೋಟೀಸ್‌ನ್ನು ನೀಡಿದ್ದು, ನೋಟೀಸ್‌ಗೆ ಅಧಿಕಾರಿಯವರು ಸಮಜಾಯಿಷಿಯನ್ನು ಸಲ್ಲಿಸಿ, ಆರೋಪ ಮುಕ್ತಗೊಳಿಸುವಂತೆ ಕೋರಿರುತ್ತಾರೆ.



ಪುಟ...2ಕ್ಕೆ

ಶ್ರೀ ಆರ್.ಬಿ. ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು ಇವರ ವಿರುದ್ಧ ಕೊಲೆ ಅಪರಾಧಕ್ಕೆ ಸಂಬಂಧಿಸಿದಂತೆ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ಇವರನ್ನು ನಿರ್ದೋಷಿಯೆಂದು ಪರಿಗಣಿಸಲಾಗಿದೆ ಹಾಗೂ ವಿಚಾರಣಾ ವರದಿಯಲ್ಲಿಯೂ ಸಹ ಆರೋಪವು ಸಾಬೀತಾಗಿಲ್ಲವೆಂದು ವಿಚಾರಣಾಧಿಕಾರಿಯವರು ತಿಳಿಸಿರುತ್ತಾರೆ. ಆದ್ದರಿಂದ ಆರೋಪಿತ ಅಧಿಕಾರಿಯವರ ಸಮಜಾಯಿಷಿಯಲ್ಲಿನ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡು ಪ್ರಕರಣವನ್ನು ಮುಕ್ತಾಯಗೊಳಿಸಲು ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 51 ವಾತೆತ 2010,**
**ಬೆಂಗಳೂರು, ದಿನಾಂಕ: 03.06.2019.**

ಶ್ರೀ ಆರ್.ಬಿ. ಪಾಟೀಲ್, ವಾಣಿಜ್ಯ ತೆರಿಗೆಗಳ ಸಹಾಯಕ ಆಯುಕ್ತರು, ವಾಣಿಜ್ಯ ತೆರಿಗೆ ಇಲಾಖೆ ಇವರನ್ನು ದಿನಾಂಕ: 07.04.2015 ರ ನೋಟೀಸಿನಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತರನ್ನಾಗಿಸುತ್ತದೆ ಹಾಗೂ ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಟ್ಟು, ಪ್ರಕರಣವನ್ನು ಮುಕ್ತಾಯಗೊಳಿಸಲಾಗಿದೆ.

ಈ ಘಟನೆ ನಡೆಯದಿದ್ದಲ್ಲಿ ಅಧಿಕಾರಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

S.V 03/06/19
(ಕಲಾವತಿ ಎಸ್.ವಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ವಾ.ತೆ. 2 & ಸಮನ್ವಯ).

**ಇವರಿಗೆ:**

1. ಮಹಾಲೇಖಪಾಲರು (ಜಿಇ-6ಎ), ಕರ್ನಾಟಕ, ಬೆಂಗಳೂರು.
2. ವಾಣಿಜ್ಯ ತೆರಿಗೆಗಳ ಆಯುಕ್ತರು, ಗಾಂಧಿನಗರ, ಬೆಂಗಳೂರು.
3. ಸಂಬಂಧಿಸಿದ ಅಧಿಕಾರಿಗೆ (ವಾಣಿಜ್ಯ ತೆರಿಗೆ ಆಯುಕ್ತರ ಮುಖಾಂತರ).
4. ಶಾಖಾ ರಕ್ಷಕ ಕಡತ / ಹೆಚ್ಚುವರಿ ಪ್ರತಿಗಳು

ವಾಣಿಜ್ಯ ತೆರಿಗೆ ಅಪರ ಆಯುಕ್ತರು
ಕೇಂದ್ರ ಕಛೇರಿ-II, (ಆಪ್ತ ಶಾಖೆ)
21 OCT 2019
2789

AC Com HQ-1/2
Anonymous complaints
19/x/19

19 OCT 2019

# ಕರ್ನಾಟಕ ಸರ್ಕಾರ

ಸಂಖ್ಯೆ: ಸಿಆಸುಇ 21 ಸೇಇವಿ 2019

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ: 03.10.2019.

22 OCT 2019

## ಸುತ್ತೋಲೆ

ವಿಷಯ: ಸರ್ಕಾರಿ ಅಧಿಕಾರಿ/ನೌಕರರ ವಿರುದ್ಧದ ಅನಾಮಧೇಯ (anonymous) ದೂರುಗಳ ಬಗ್ಗೆ ಕ್ರಮ.

ಉಲ್ಲೇಖ:
1. ಸುತ್ತೋಲೆ ಸಂಖ್ಯೆ: ಜಿಎಡಿ 113 ಒಬಎ 62, ದಿನಾಂಕ: 26.10.1962.
2. ಭಾರತ ಸರ್ಕಾರದ ಡಿ.ಓ.ಪಿ.ಟಿ ಅಧಿಕೃತ ಜ್ಞಾಪನ ಸಂಖ್ಯೆ:104/76/2011-AVD.1, ದಿನಾಂಕ:18.10.2013

413

****

1. ಸರ್ಕಾರಿ ಅಧಿಕಾರಿ/ನೌಕರರ ವಿರುದ್ಧ ಸ್ವೀಕೃತವಾಗುವ ಅನಾಮಧೇಯ ದೂರುಗಳ ಬಗ್ಗೆ ಕೈಗೊಳ್ಳಬೇಕಾದ ಕ್ರಮಗಳ ಬಗ್ಗೆ ಉಲ್ಲೇಖಿತ ಸುತ್ತೋಲೆಯಲ್ಲಿ ಕೆಲವು ಸೂಚನೆಗಳನ್ನು ನೀಡಲಾಗಿದೆ. ಇಂತಹ ದೂರುಗಳು ಕೆಲವು ಸಂದರ್ಭಗಳಲ್ಲಿ ವ್ಯಯಕ್ತಿಕ ದ್ವೇಷ, ಅಸೂಯೆ ಅಥವಾ ಪೂರ್ವಗ್ರಹ ಪೀಡಿತವಾಗಿರುತ್ತವೆ. ಅಲ್ಲದೇ, ದೂರುಗಳಿಗೆ ಪೂರಕವಾದ ಮಾಹಿತಿ/ದಾಖಲೆಗಳನ್ನು ಸಾಮಾನ್ಯವಾಗಿ ಲಭ್ಯಪಡಿಸಿರುವುದಿಲ್ಲ. ಇಂತಹ ದೂರುಗಳಿಂದಾಗಿ ಸರ್ಕಾರಿ ಅಧಿಕಾರಿ/ನೌಕರರ ದೈನಂದಿನ ಕೆಲಸ ಕಾರ್ಯಗಳಲ್ಲಿ ಹಸ್ತಕ್ಷೇಪ ಉಂಟಾಗುವುದಲ್ಲದೇ ದಕ್ಷ ಹಾಗೂ ಪ್ರಮಾಣಿಕ ನೌಕರರ ವಿಶ್ವಾಸರ್ಹತೆಗೆ ಧಕ್ಕೆ ಉಂಟಾಗುತ್ತದೆ ಹಾಗೂ ಅವರು ಮುಕ್ತ ಮತ್ತು ನಿರ್ಭೀತರಾಗಿ ಕೆಲಸ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ.

2. ಮಾನ್ಯ ಮುಖ್ಯಮಂತ್ರಿಯವರು ದಿನಾಂಕ: 04.08.2019ರ ಟಿಪ್ಪಣಿಯಲ್ಲಿ ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘವು ಈ ಸಂಬಂಧ ನೀಡಿರುವ ಮನವಿಯನ್ನು ಪರಿಗಣಿಸಿ, ಕೇಂದ್ರ ಸರ್ಕಾರದ ಮಾದರಿಯಂತೆಯೇ ರಾಜ್ಯದಲ್ಲಿ ಸರ್ಕಾರಿ ನೌಕರರ ವಿರುದ್ಧ ಅನಾಮಧೇಯ ದೂರು/ಪತ್ರಗಳ ಆಧಾರದ ಮೇಲೆ ತನಿಖೆಗೆ ಒಳಪಡಿಸದೆ, ಪೂರ್ಣ ವಿಳಾಸ ಸಹಿತವಿರುವ ದೂರುಗಳನ್ನು ಮಾತ್ರ ತನಿಖೆಗೆ ಪರಿಗಣಿಸಲು ಆದೇಶ ಹೊರಡಿಸುವಂತೆ ಸೂಚಿಸಿರುತ್ತಾರೆ.

...2

3. ಮೇಲ್ಕಾಣಿಸಿದ ಅಂಶಗಳ ಹಾಗೂ ಭಾರತ ಸರ್ಕಾರದ ಉಲ್ಲೇಖ-2ರ ಅಧಿಕೃತ ಜ್ಞಾಪನದ ಹಿನ್ನೆಲೆಯಲ್ಲಿ ಸರ್ಕಾರಿ ಅಧಿಕಾರಿ/ನೌಕರರ ವಿರುದ್ಧ ಸ್ವೀಕೃತವಾಗುವ ಅನಾಮಧೇಯ ಅರ್ಜಿಗಳ ಆಧಾರದ ಮೇಲೆ ಪ್ರಕರಣವನ್ನು ತನಿಖೆಗೆ/ವಿಚಾರಣೆಗೆ ಒಳಪಡಿಸದೇ ಅಂತಹ ದೂರು ಅರ್ಜಿಗಳನ್ನು ಕಡತಗೊಳಿಸಬೇಕೆಂದು ಸೂಚಿಸಿದೆ.

4. ಪೂರ್ಣ ವಿಳಾಸ ಸಹಿತವಿರುವ ದೂರುಗಳನ್ನು ಮಾತ್ರ ತನಿಖೆಗೆ/ವಿಚಾರಣೆಗೆ ಪರಿಗಣಿಸಲು ಸಚಿವಾಲಯದ ಎಲ್ಲಾ ಕಾರ್ಯದರ್ಶಿಗಳಿಗೆ ಹಾಗೂ ಇಲಾಖಾ ಮುಖ್ಯಸ್ಥರಿಗೆ ಸೂಚಿಸಲಾಗಿದೆ. ಈ ಅಂಶವನ್ನು ಸಂಬಂಧಪಟ್ಟ ಇಲಾಖೆಗಳು ತಮ್ಮ ಅಧೀನ ಕಛೇರಿಗಳಿಗೆ ತಿಳಿಸಲು ಅಗತ್ಯ ಕ್ರಮವಹಿಸುವಂತೆ ಸೂಚಿಸಲಾಗಿದೆ.

(ತ.ಮ. ವಿಜಯ ಭಾಸ್ಕರ್)
ಸರ್ಕಾರದ ಮುಖ್ಯ ಕಾರ್ಯದರ್ಶಿ

1. ಸರ್ಕಾರದ ಎಲ್ಲಾ ಅಪರ ಮುಖ್ಯ ಕಾರ್ಯದರ್ಶಿಗಳು/ಪ್ರಧಾನ ಕಾರ್ಯದರ್ಶಿಗಳು/ ಕಾರ್ಯದರ್ಶಿಗಳು
2. ಮುಖ್ಯಮಂತ್ರಿಯವರ ಅಪರ ಮುಖ್ಯ ಕಾರ್ಯದರ್ಶಿ.
3. ನಿವಾಸಿ ಆಯುಕ್ತರು, ಕರ್ನಾಟಕ ಭವನ, ಕೌಟಿಲ್ಯ ಮಾರ್ಗ, ಚಾಣಕ್ಯಪುರಿ, ನವದೆಹಲಿ-110011.
4. ಎಲ್ಲಾ ಇಲಾಖಾ ಮುಖ್ಯಸ್ಥರು.
5. ಎಲ್ಲಾ ಪ್ರಾದೇಶಿಕ ಆಯುಕ್ತರು.
6. ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು/ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್.
7. ಸರ್ಕಾರದ ಎಲ್ಲಾ ವಿಶೇಷ/ಅಪರ/ಜಂಟಿ/ಉಪ/ಅಧೀನ ಕಾರ್ಯದರ್ಶಿಗಳು.
8. ಅಧ್ಯಕ್ಷರು, ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಬೆಂಗಳೂರು
9. ಶಾಖಾ ರಕ್ಷಾ ಕಡತ/ಬಿಡಿ ಪ್ರತಿಗಳು.